# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1338
2. ಸದಸ್ಯರ ಹೆಸರು : ಶ್ರೀ ಎಸ್.ನಾಗರಾಜು (ಸಂದೇಶ್ ನಾಗರಾಜು)
3. ಉತ್ತರಿಸಬೇಕಾದ ದಿನಾಂಕ : 23-09-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯ ಕೆರೆಗಳಿಗೆ ನೀರು ತುಂಬಿಸುವ ಸುತ್ತೂರು ಏತ ನೀರಾವರಿ ಯೋಜನೆಯ ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿವೆಯೇ; ಇನ್ನೂ ಯಾವ ಯಾವ ಕಾಮಗಾರಿಗಳು ಬಾಕಿ ಇವೆ; ಯಾವಾಗ ಈ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು; | ಕುಡಿಯುವ ನೀರಿಗಾಗಿ ಕಬಿನಿ ನದಿಯಿಂದ ನೀರನ್ನು ಎತ್ತಿ ನಂಜನಗೂಡು, ಚಾಮರಾಜನಗರ ಮತ್ತು ಯಳಂದೂರು ತಾಲ್ಲೂಕುಗಳ ಒಟ್ಟು 24 ಕೆರೆಗಳಿಗೆ ನೀರನ್ನು ತುಂಬಿಸುವ ರೂ.233.00 ಕೋಟಿ ಅಂದಾಜು ಮೊತ್ತದ ಸುತ್ತೂರು ಏತ ಯೋಜನೆಯ ಪ್ರಸ್ತುತ ಹಂತದ ವಿವರಗಳು ಕೆಳಕಂಡಂತಿದೆ :<br><br>**ಮೊದಲನೇ ಹಂತ:**<br>• ಮೊದಲನೇ ಹಂತದ ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿದ್ದು, ಆಗಸ್ಟ್-2021 ರ ಮಾಹೆಯಲ್ಲಿ ಪ್ರಾಯೋಗಿಕವಾಗಿ ಚಾಲನೆಗೊಳಿಸಿ, ಇದರಡಿ ಬರುವ ತಗಡೂರು ಕುಂಕೆರೆ, ಚಿಕ್ಕಹೊಮ್ಮ ಕೆರೆ, ಉಮ್ಮತ್ತೂರು ಕೆರೆ ಹಾಗೂ ಕೋಡಿಮೋಳೆ ಕೆರೆಗಳಿಗೆ ನೀರನ್ನು ಹರಿಸಲಾಗುತ್ತಿದೆ.<br><br>**ಎರಡನೇ ಹಂತ:**<br>• ಎರಡನೇ ಹಂತದ ಪಂಪ್ ಹೌಸ್‌ನ ಸಿವಿಲ್ ಕಾಮಗಾರಿಗಳು, ಪಂಪ್ ಮತ್ತು ಮೋಟರ್‌ಗಳನ್ನು ಅಳವಡಿಸುವ ಕಾಮಗಾರಿಗಳು ಪೂರ್ಣಗೊಂಡಿವೆ.<br>• ಎರಡನೇ ಹಂತದ ಎಡಭಾಗದಲ್ಲಿ ಒಟ್ಟು 7.76 ಕಿ.ಮೀ ಉದ್ದದ ಪೈಪ್‌ಲೈನ್ ಕಾಮಗಾರಿ ಪೈಕಿ 6.36 ಕಿ.ಮೀ ಉದ್ದಕ್ಕೆ ಕಾಮಗಾರಿ ಪೂರ್ಣಗೊಂಡಿದ್ದು, ಉಳಿಕೆ 1.40 ಕಿ.ಮೀ ಉದ್ದದ ಪೈಪ್ ಲೈನ್ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br>• ಎರಡನೇ ಹಂತದ ಬಲಭಾಗದಲ್ಲಿ ಒಟ್ಟು 7.86 ಕಿ.ಮೀ ಉದ್ದದ ಪೈಪ್‌ಲೈನ್ ಕಾಮಗಾರಿ ಪೈಕಿ 7.83 ಕಿ.ಮೀ ಉದ್ದಕ್ಕೆ ಕಾಮಗಾರಿ ಪೂರ್ಣಗೊಂಡಿದ್ದು, ಉಳಿಕೆ 0.03 ಕಿ.ಮೀ ಉದ್ದದ ಪೈಪ್ ಲೈನ್ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br>• ಒಟ್ಟು 19 ಟವರ್‌ಗಳ ಪೈಕಿ 12 ಟವರ್‌ಗಳನ್ನು ಅಳವಡಿಸುವ ಕಾಮಗಾರಿಯು ಪೂರ್ಣಗೊಂಡಿದ್ದು, ಟವರ್-13 ರನ್ನು ಅಳವಡಿಸುವ ಸ್ಥಳದ ಭೂಮಾಲೀಕರಾದ ಶ್ರೀ ಸಂಪತ್ ಕುಮಾರ್ ರವರು ಅವರ ಜಮೀನು ಸಣ್ಣ ಜಮೀನಾಗಿದ್ದು, ಈ ಜಮೀನಿನಲ್ಲಿ ಟವರ್ ಅಳವಡಿಸಬಾರದೆಂದು ಹಾಗೂ ಪಂಕ್ತೀಕರಣವನ್ನು ಬದಲಿಸುವಂತೆ ಚಾಮರಾಜನಗರದ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ಸದರಿ ಟವರ್‌ನ ಕಾಮಗಾರಿಯನ್ನು ಹಾಗೂ ಉಳಿದ 6 ಟವರ್‌ಗಳ ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ವಿಳಂಬವಾಗುತ್ತಿದೆ.<br>• ಈ ಹಂತದಲ್ಲಿ 4.20 ಕಿ.ಮೀ ವಿದ್ಯುತ್ ಮಾರ್ಗ ನಿರ್ವಹಿಸಬೇಕಾಗಿರುತ್ತದೆ.<br>• ಸಬ್ ಸ್ಟೇಷನ್ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.<br><br>ಎರಡನೇ ಹಂತಕ್ಕೆ ಸಂಬಂಧಿಸಿದ ಎಲ್ಲಾ ಕಾಮಗಾರಿಗಳನ್ನು ಮಾರ್ಚ್ 2022 ರ ಒಳಗೆ ಪೂರ್ಣಗೊಳಿಸಿ, ಚಾಲನೆಗೊಳಿಸಲು ಅಗತ್ಯ ಕ್ರಮ ವಹಿಸಲಾಗುತ್ತಿದೆ. |
| ಆ | ಈ ಏತ ನೀರಾವರಿ ಯೋಜನೆ ಮೂಲಕ ಈ ಜಿಲ್ಲೆಗಳಲ್ಲಿ ಎಷ್ಟು ಕೆರೆಗಳಿಗೆ ನೀರು ತುಂಬಿಸಲಾಗುವುದು; ಆ ಕೆರೆಗಳು ಯಾವುವು; ಪ್ರಸಕ್ತ ಮಳೆಗಾಲ | ಈ ಯೋಜನೆಯ ಮೂಲಕ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಡಿ ಬರುವ ಒಟ್ಟು 24 ಕೆರೆಗಳಿಗೆ ನೀರನ್ನು ತುಂಬಿಸಲು ಯೋಜಿಸಲಾಗಿದ್ದು, ವಿವರ ಇಂತಿದೆ; |

| ಕ್ರ ಸಂ | ಜಿಲ್ಲೆ | ಕೆರೆಗಳ ವಿವರ | |
|---|---|---|---|
| | | ಸಂಖ್ಯೆ | ಹೆಸರು |
| 1 | ಮೈಸೂರು | 2 | 1) ಕುಂಕೆರೆ<br>2) ಚಿಕ್ಕಹೊಮ್ಮ ಕೆರೆ |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| | ಮುಗಿಯುವುದರ ಒಳಗೆ ನದಿಯಲ್ಲಿ ವ್ಯರ್ಥವಾಗಿ ಹರಿದುಹೋಗುತ್ತಿರುವ ನೀರನ್ನು ಮೇಲೆತ್ತಿ ಈ ಕೆರೆಗಳಿಗೆ ನೀರು ತುಂಬಿಸಲು ಕ್ರಮ ಜರುಗಿಸಲಾಗುವುದೇ? | (see table and text below) |

| ಕ್ರ ಸಂ | ಜಿಲ್ಲೆ | ಕೆರೆಗಳ ವಿವರ | | |
|---|---|---|---|---|
| | | ಸಂಖ್ಯೆ | ಹೆಸರು | |
| 2 | ಚಾಮರಾಜನಗರ | 22 | 1) ಜನ್ನೂರು ಕೆರೆ,<br>2) ಉಮ್ಮತ್ತೂರು ಕೆರೆ,<br>3) ಬಾಗಲಿ ಕೆರೆ,<br>4) ಯಡಿಯೂರು ಅಡ್ಡಹಳ್ಳ ಕೆರೆ,<br>5) ದೊಡ್ಡರಾಯಪೇಟೆ ಕೆರೆ,<br>6) ಕೋಡಿಮೋಳೆ ಕೆರೆ,<br>7) ಹೊಮ್ಮ ಕೆರೆ,<br>8) ಕಣ್ಣೇಗಾಲ ಕೆರೆ,<br>9) ಅಂಬೈ ಕೆರೆ,<br>10) ದೊಡ್ಡ ಕೆರೆ,<br>11) ಚಿಕ್ಕ ಕೆರೆ, | 12) ಸಿಂಡಿಗೆರೆ ಕೆರೆ,<br>13) ಮರಗದ ಕೆರೆ,<br>14) ಬಂಡಿಗೆರೆ ಕೆರೆ,<br>15) ನಗರದ ಕೆರೆ,<br>16) ಸರಗೂರಮೋಳೆ ಕೆರೆ,<br>17) ಹೆಬ್ಬಳ್ಳ ಕೆರೆ,<br>18) ಮಲ್ಲದೇವನಹಳ್ಳಿ ಕೆರೆ,<br>19) ಪುಟ್ಟನಪುರ ಕೆರೆ,<br>20) ಹೊಂಡರಬಾಳು ಕೆರೆ,<br>21) ನಾಗವಳ್ಳಿ ಕೆರೆ ಹಾಗೂ<br>22) ಕಾಗಲವಾಡಿ ಕೆರೆ |
| | ಒಟ್ಟು :- | 24 | | |

ಮೊದಲನೇ ಹಂತವನ್ನು ಆಗಸ್ಟ್-2021 ರ ಮಾಹೆಯಲ್ಲಿ ಪ್ರಾಯೋಗಿಕವಾಗಿ ಚಾಲನೆಗೊಳಿಸಲಾಗಿದ್ದು, ಪ್ರಸಕ್ತ ಮಳೆಗಾಲದಲ್ಲಿ ಮೈಸೂರು ಜಿಲ್ಲೆಯ ಕುಂಕೆರೆ, ಚಿಕ್ಕಹೊಮ್ಮ ಕೆರೆ ಹಾಗೂ ಚಾಮರಾಜನಗರ ಜಿಲ್ಲೆಯ ಉಮ್ಮತ್ತೂರು ಕೆರೆ ಮತ್ತು ಕೋಡಿಮೋಳೆ ಕೆರೆಗಳಿಗೆ ನೀರನ್ನು ಹರಿಸಲಾಗುತ್ತಿದೆ.

ಎರಡನೇ ಹಂತಕ್ಕೆ ಸಂಬಂಧಿಸಿದ ಎಲ್ಲಾ ಕಾಮಗಾರಿಗಳನ್ನು ಮಾರ್ಚ್ 2022 ಮಾಹೆಯ ಒಳಗೆ ಪೂರ್ಣಗೊಳಿಸಲು ಕ್ರಮ ವಹಿಸಲಾಗುತ್ತಿದ್ದು, ಉಳಿದ ಕೆರೆಗಳಿಗೆ ಹಂತ ಹಂತವಾಗಿ ನೀರನ್ನು ಹರಿಸಲಾಗುವುದು.

*ಸಂಖ್ಯೆ:ಜಸಂಇ 163 ಎನ್‌ಎಲ್‌ಎ 2021*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು